ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 118

ಮಾನ್ಯ ಸದಸ್ಯರ ಹೆಸರು : ಶ್ರೀ ಎಸ್.ಆರ್. ಪಾಟೀಲ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ವಿಷಯ : ಬಾಗಲಕೋಟೆ-ವಿಜಯಪುರ ಜಿಲ್ಲೆಯ ಪ್ರವಾಸೋದ್ಯಮಗಳ ಕುರಿತು.

ಉತ್ತರಿಸುವ ದಿನಾಂಕ : 15/07/2019

ಉತ್ತರಿಸುವ ಸಚಿವರು : ಪ್ರವಾಸೋದ್ಯಮ ಮತ್ತು ರೇಷ್ಮೆ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬಾಗಲಕೋಟೆ-ವಿಜಯಪುರ ಜಿಲ್ಲೆಯಲ್ಲಿನ ಐತಿಹಾಸಿಕ ಸ್ಥಳಗಳಾದಂತಹ ಬಾದಾಮಿ, ಪಟ್ಟದಕಲ್ಲು, ಐಹೊಳೆ, ಗೋಲ್‌ಗುಂಬಜ್, ಇಬ್ರಾಹಿಂ ರೋಜಾ, ಇತರೆ ಪ್ರವಾಸಿ ತಾಣಗಳ ಅಭಿವೃದ್ಧಿಗಾಗಿ ಸರ್ಕಾರ ಕೈಗೊಂಡ ಕ್ರಮಗಳೇನು; | 2018-19 ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಚಾಲುಕ್ಯರ ಶ್ರೀಮಂತ ಪರಂಪರೆಯನ್ನು ಬಿಂಬಿಸುವ ಬಾದಾಮಿ, ಪಟ್ಟದಕಲ್ಲು ಹಾಗೂ ಐಹೊಳೆ ಪ್ರವಾಸಿ ತಾಣಗಳನ್ನು ಒಂದು ಸಮಗ್ರ ಪ್ರವಾಸಿ ವೃತ್ತವಾಗಿ ಪರಿಗಣಿಸಿ, ಪಟ್ಟದಕಲ್ಲಿನ ಕಾಟಾಪುರ ಗ್ರಾಮದಲ್ಲಿ ಲಭ್ಯವಿರುವ ಇಲಾಖೆಯ 24 ಎಕರೆ 8 ಗುಂಟೆ ವಿಸ್ತೀರ್ಣದ ಜಮೀನಿನಲ್ಲಿ ಪ್ರವಾಸಿಗರಿಗೆ ಎಲ್ಲಾ ಪ್ರವಾಸಿ ಸೌಲಭ್ಯಗಳನ್ನು ಹಾಗೂ ಕರಕುಶಲ ಮಾರುಕಟ್ಟೆಯನ್ನು ಅಭಿವೃದ್ಧಿಪಡಿಸಲು ಕರ್ನಾಟಕ ಗೃಹ ಮಂಡಳಿಯನ್ನು ಅನುಷ್ಠಾನ ಸಂಸ್ಥೆಯನ್ನಾಗಿ ಸರ್ಕಾರದ ಆದೇಶ ಸಂಖ್ಯೆ: ಪ್ರಇ/279/ಪ್ರವಾಯೋ/2018, ದಿನಾಂಕ: 27/12/2018 ರಂತೆ ನೇಮಕ ಮಾಡಲಾಗಿರುತ್ತದೆ. ಈ ಯೋಜನೆ ಸಂಬಂಧ ರೂ.29.25 ಕೋಟಿಗಳ ಕರಡು ವಿಸ್ತೃತ ಯೋಜನಾ ವರದಿಯನ್ನು ಸಲ್ಲಿಸಿರುತ್ತಾರೆ.<br><br>ಬಾಗಲಕೋಟೆ ಜಿಲ್ಲೆಯ ಬಾದಾಮಿ, ಐಹೊಳೆ ಮತ್ತು ಪಟ್ಟದಕಲ್ಲು ಪ್ರವಾಸಿ ತಾಣಗಳನ್ನು ಸಮಗ್ರವಾಗಿ ಅಭಿವೃದ್ಧಿಪಡಿಸಿ ಪ್ರವಾಸಿ ಸೌಲಭ್ಯಗಳನ್ನು ಕಲ್ಪಿಸುವ ಸಂಬಂಧ ಬಾಗಲಕೋಟೆ ಜಿಲ್ಲೆಯ ಪಟ್ಟದಕಲ್ಲಿನಲ್ಲಿರುವ ಇಲಾಖೆಯ 24 ಎಕರೆ ಜಮೀನಿನಲ್ಲಿ ಟೂರಿಸಂ ಪ್ಲಾಜಾ ನಿರ್ಮಾಣ ಕಾಮಗಾರಿಯನ್ನು ರೂ.800.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ಸರ್ಕಾರದ ಅನುಮೋದನೆ ನೀಡಿ ಮೊದಲನೇ ಕಂತಾಗಿ ರೂ.500.00 ಲಕ್ಷಗಳನ್ನು ಕೆ.ಟಿ.ಐ.ಎಲ್ ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ.<br><br>ಬಾದಾಮಿಯಲ್ಲಿ 75 ಕೊಠಡಿಗಳ ತ್ರಿಸ್ಟಾರ್ ಹೋಟೆಲನ್ನು ರೂ.1832.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೆ.ಎಸ್.ಟಿ.ಡಿ.ಸಿ ಮೂಲಕ ಕೈಗೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ. |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| | | 2019-20ನೇ ಸಾಲಿನ ಆಯವ್ಯಯ ಭಾಷಣದಲ್ಲಿ ವಿಜಯಪುರ ಪ್ರವಾಸೋದ್ಯಮ ಚಟುವಟಿಕೆಗಳನ್ನು ಮತ್ತಷ್ಟು ಉತ್ತೇಜಿಸಲು "ವಿಜಯಪುರ ಪ್ರವಾಸೋದ್ಯಮ ವ್ಯಾಖ್ಯಾನ ಕೇಂದ್ರ"ವನ್ನು ರೂ.100.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಸ್ಥಾಪಿಸಲು ಕ್ರಮ ಕೈಗೊಳ್ಳಲಾಗುವುದು.<br><br>ವಿಜಯಪುರ ನಗರದಲ್ಲಿ ಪ್ರವಾಸಿಗರ ಅನುಕೂಲಕ್ಕಾಗಿ ಪ್ರವಾಸಿ ಸೌಲಭ್ಯಗಳ ಅಭಿವೃದ್ಧಿಯನ್ನು ರೂ.500.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ಸರ್ಕಾರದ ಅನುಮೋದನೆ ನೀಡಿ ಪೂರ್ಣ ಅನುದಾನವನ್ನು ಕೆ.ಟಿ.ಐ.ಎಲ್ ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ.<br><br>ವಿಜಯಪುರದಲ್ಲಿ 75 ಕೊಠಡಿಗಳ ತ್ರಿಸ್ಟಾರ್ ಹೋಟೆಲನ್ನು ರೂ.1674.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೆ.ಎಸ್.ಟಿ.ಡಿ.ಸಿ ಮೂಲಕ ಕೈಗೊಳ್ಳಲು ಸರ್ಕಾರದ ಅನುಮೋದನೆ ನೀಡಿರುತ್ತದೆ.<br><br>ಇದಲ್ಲದೇ, ಬಾಗಲಕೋಟೆ-ವಿಜಯಪುರ ಜಿಲ್ಲೆಯಲ್ಲಿನ ಐತಿಹಾಸಿಕ ಪ್ರವಾಸಿ ತಾಣಗಳ ಬಳಿ ಕೈಗೊಂಡಿರುವ ಪ್ರವಾಸೋದ್ಯಮ ಅಭಿವೃದ್ಧಿ ಕಾಮಗಾರಿಗಳ ವಿವರವನ್ನು ಅನುಬಂಧದಲ್ಲಿ ಒದಗಿಸಿದೆ. |
| ಆ) | ಸದರಿ ಸ್ಥಳಗಳ ಅಭಿವೃದ್ಧಿಗಾಗಿ ಕಾಯ್ದಿರಿಸಿದ ಹಣ ಹಾಗೂ ಬಿಡುಗಡೆಗೊಳಿಸಿದ ಹಣ ಎಷ್ಟು; | ಅನುಬಂಧದಲ್ಲಿ ಒದಗಿಸಿದೆ. |
| ಇ) | ಈ ಐತಿಹಾಸಿಕ ಸ್ಥಳಗಳ ಅಭಿವೃದ್ಧಿಯನ್ನು ಸಮರೋಪಾದಿಯಲ್ಲಿ ಕೈಗೊಳ್ಳಲು ಸರ್ಕಾರಕ್ಕೆ ಇರುವ ತೊಂದರೆಗಳೇನು? | ಉದ್ಭವಿಸುವುದಿಲ್ಲ. |

ಪ್ರಇ 9 ಪ್ರವಾವಿ 2019

(ಸಾ.ರಾ.ಮಹೇಶ್)
ಪ್ರವಾಸೋದ್ಯಮ ಮತ್ತು ರೇಷ್ಮೆ ಸಚಿವರು

**ಅನುಬಂಧ**

**(ಪ್ರಶ್ನೆ ಸಂಖ್ಯೆ : 118)**

# ಬಾಗಲಕೋಟೆ ಹಾಗೂ ವಿಜಯಪುರ ಜಿಲ್ಲೆಯಲ್ಲಿನ ಐತಿಹಾಸಿಕ ಸ್ಥಳಗಳ ಬಳಿ ಕೈಗೊಂಡಿರುವ ಪ್ರವಾಸೋದ್ಯಮ ಅಭಿವೃದ್ಧಿ ಕಾಮಗಾರಿಗಳ ವಿವರ

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಯೋಜನೆಗಳ ವಿವರ | ಅಂದಾಜು ಮೊತ್ತ | ಈವರೆಗೂ ಬಿಡುಗಡೆ ಮಾಡಿರುವ ಅನುದಾನ | 2019–20ನೇ ಸಾಲಿನಲ್ಲಿ ಕಾಯ್ದಿರಿಸಿರುವ ಅನುದಾನ |
|---|---|---|---|---|
| | ವಿಜಯಪುರ ಜಿಲ್ಲೆ | | | |
| 1 | ಬಿಜಾಪುರ ನಗರದ ಹಲವಾರು ಪ್ರವಾಸಿ ಸ್ಮಾರಕಗಳಿಗೆ ಸಂಪರ್ಕ ರಸ್ತೆಗಳ ಅಭಿವೃದ್ಧಿ ಹಾಗೂ ಇತರೆ ಮೂಲಭೂತ ಸೌಲಭ್ಯ ಕಲ್ಪಿಸುವ ಯೋಜನೆ. | 100.00 | 100.00 | – |
| 2 | ಬಿಜಾಪುರ ಜಿಲ್ಲೆಯಲ್ಲಿನ ಪ್ರವಾಸಿ ತಾಣಗಳಲ್ಲಿ ಮೂಲಭೂತ ಸೌಲಭ್ಯಗಳ ನಿರ್ಮಾಣ. | 100.00 | 100.00 | – |
| 3 | ಬಿಜಾಪುರ ನಗರದ ವಿಶ್ವವಿಖ್ಯಾತ ಗೋಲ ಗುಮ್ಮಟ ಆವರಣದಲ್ಲಿ ಇಲಾಖೆಯಿಂದ ಅಳವಡಿಸಿರುವ ಹೊನಲು ಬೆಳಕಿನ ದುರಸ್ಥಿ ಕಾಮಗಾರಿ. | 11.00 | 11.00 | – |
| 4 | ಬಿಜಾಪುರ ಜಿಲ್ಲೆಯ ಬೂತನಾಳ ಕೆರೆ ಪ್ರದೇಶದಲ್ಲಿ ಕೇಂದ್ರ ನೆರವಿನ ಯೋಜನೆ ಅಡಿ, ಪಾಥ್ ವೇ, ಉದ್ಯಾನವನ, ಶೌಚಾಲಯ, ಆಸನಗಳ ವ್ಯವಸ್ಥೆ ಹಾಗೂ ಪರಗೋಲ ಮುಂತಾದ ಪ್ರವಾಸಿ ಸೌಲಭ್ಯಗಳ ನಿರ್ಮಾಣ. | 113.82 | 113.82 | – |
| 5 | ಬಿಜಾಪುರ ನಗರದಲ್ಲಿರುವ ಸಾಹಸ್ರಫಣಿ ಪಾರ್ಶ್ವನಾಥ ದಿಗಂಬರ ಜೈನ ಮಂದಿರದ ಬಳಿ ಯಾತ್ರಿನಿವಾಸ. | 60.00 | 60.00 | – |
| 6 | ಬಿಜಾಪುರ ನಗರದಲ್ಲಿನ ರೈಲು ನಿಲ್ದಾಣದಿಂದ ಗೋಲು ಗುಮ್ಮಟ ಮುಖ್ಯರಸ್ತೆ ವರೆಗೆ ರಸ್ತೆ ಅಭಿವೃದ್ಧಿ. | 66.10 | 66.10 | – |
| 7 | ಬಿಜಾಪುರ ನಗರದ ಬಸ್ ನಿಲ್ದಾಣದಿಂದ ಉಪ್ಲಿ ಬುರುಜ ವರೆಗಿನ (ವಯಾ ಜೋಡು ಗುಮ್ಮಟ) ಮುಖ್ಯರಸ್ತೆವರೆಗೆ ರಸ್ತೆ ಅಭಿವೃದ್ಧಿ. | 126.00 | 126.00 | – |
| 8 | ಬಿಜಾಪುರ ನಗರದಲ್ಲಿನ ಬಡೀ ಕಮಾನ್ ನಿಂದ ರೈಲು ನಿಲ್ದಾಣದವರೆಗೆ ಮುಖ್ಯರಸ್ತೆ ಅಭಿವೃದ್ಧಿ. | 50.00 | 50.00 | – |
| 9 | ಬಿಜಾಪುರ ನಗರದಲ್ಲಿರುವ ಗೋಲ್ ಗುಂಬಜ್ ಪ್ರವಾಸಿ ಸ್ಥಳವನ್ನು ವೀಕ್ಷಿಸಲು ಬರುವ ಪ್ರವಾಸಿಗರ ಅನುಕೂಲಕ್ಕಾಗಿ 14 ಸೀಟುಗಳ ಬ್ಯಾಟರಿ ಚಾಲಿತ 2 ವಾಹನಗಳ ಖರೀದಿ. | 16.88 | 16.88 | – |

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಯೋಜನೆಗಳ ವಿವರ | ಅಂದಾಜು ಮೊತ್ತ | ಈವರೆಗೂ ಬಿಡುಗಡೆ ಮಾಡಿರುವ ಅನುದಾನ | 2019–20ನೇ ಸಾಲಿನಲ್ಲಿ ಕಾಯ್ದಿರಿಸಿರುವ ಅನುದಾನ |
|---|---|---|---|---|
| 10 | ಬಿಜಾಪುರ ನಗರದಲ್ಲಿರುವ ಇಬ್ರಾಹಿಂ ರೋಜಾ ಪ್ರವಾಸಿ ಸ್ಥಳದ ಬಳಿ 1 ವಾಹನ ಹಾಗೂ ಪಟ್ಟದ ಕಲ್ಲು ಪ್ರವಾಸಿ ಸ್ಥಳವನನು ವೀಕ್ಷಿಸಲು ಬರುವ ಪ್ರವಾಸಿಗರ ಅನುಕೂಲಕ್ಕಾಗಿ 2 ವಾಹನ ಒಟ್ಟು 11 ಸೀಟುಗಳ ಬ್ಯಾಟರಿ ಚಾಲಿತ 3 ವಾಹನಗಳ ಖರೀದಿ. | 22.95 | 22.95 | – |
| 11 | ವಿಜಯಪುರ ನಗರವನ್ನು ಮಾದರಿ ಪ್ರವಾಸಿ ತಾಣವಾಗಿ ಅಭಿವೃದ್ದಿ ಪಡಿಸುವ ಯೋಜನೆ | 1000.00 | 350.00 | – |
| 12 | ವಿಜಯಪುರ ನಗರದಲ್ಲಿ ಟೂರಿಸಂ ಪ್ಲಾಜಾ ಸ್ಥಾಪನೆ | 169.00 | 169.00 | – |
| 13 | ವಿಜಯಪುರ ಜಿಲ್ಲೆ ಕುಮಟಗಿ ಯಿಂದ ವಾಟರ್ ಪೆವಿಲಿಯನ್ (ಬೇಸಿಗೆ ಅರಮನೆ) ವರೆಗೆ ರಸ್ತೆ ಸುಧಾರಣೆ. | 75.00 | 25.00 | 50.00 |
| 14 | ವಿಜಯಪುರ ನಗರದಲ್ಲಿ ಪ್ರವಾಸಿಗರ ಅನುಕೂಲಕ್ಕಾಗಿ ಪ್ರವಾಸಿ ಸೌಲಭ್ಯ ಅಭಿವೃದ್ಧಿ (ಇಂಟರ್ ಪ್ರಿಟೇಶನ್ ಸೆಂಟರ್ ಇತ್ಯಾದಿ). | 500.00 | 500.00 | – |
| 15 | ಸಿಂದಗಿ ಬೈಪಾಸ ದಿಂದ ಗೋಲಗುಮ್ಮಟ ವರೆಗೆ ರಸ್ತೆ ಸುಧಾರಣೆ ಮಾಡುವುದು. | 100.00 | 100.00 | – |
| 16 | ವಿಜಯಪುರ ಜಿಲ್ಲೆಯ ಆಲಮಟ್ಟಿ ಪ್ರದೇಶವನ್ನು ಸಮಗ್ರ ಪ್ರವಾಸಿ ತಾಣವಾಗಿ ಅಭಿವೃದ್ಧಿಪಡಿಸುವ ಯೋಜನೆ. | 470.23 | – | 100.00 |
| | **ಒಟ್ಟು** | **2980.98** | **1810.75** | **150.00** |
| | **ಬಾಗಲಕೋಟೆ ಜಿಲ್ಲೆ** | | | |
| 17 | ಬಾದಾಮಿ ಪಟ್ಟಣದಲ್ಲಿರುವ ಡಾ: ಬಿ.ಆರ್.ಅಂಬೇಡ್ಕರ್ ವೃತ್ತದಿಂದ ಪ್ರಸಿದ್ಧ ಗುಹಾಂತರ ದೇವಾಲಯಗಳಿಗೆ ಸಂಪರ್ಕ ರಸ್ತೆ ಅಭಿವೃದ್ಧಿ. | 45.00 | 45.00 | – |
| 18 | ವಿಶ್ವಪರಂಪರಾ ಕೇಂದ್ರವಾದ ಪಟ್ಟದಕಲ್ಲಿನಲ್ಲಿ ಪ್ರವಾಸಿ ಸೌಲಭ್ಯಗಳನ್ನು ನಿರ್ಮಿಸಲು ಜಮೀನು ಖರೀದಿಸುವ ಬಗ್ಗೆ. | 100.00 | 100.00 | – |
| 19 | ಬಾದಾಮಿಯಲ್ಲಿ ಮಾನವವಿಕಾಸ ಪಾರ್ಕ್ ನಿರ್ಮಾಣ ಕಾಮಗಾರಿ. | 47.84 | 35.00 | – |
| 20 | ಬಾದಾಮಿ ತಾಲ್ಲೂಕಿನ ಪಟ್ಟದಕಲ್ಲಿನ ದೇವಾಲಯಕ್ಕೆ ಹೋಗುವ ಸಂಪರ್ಕರಸ್ತೆ ಕಿ.ಮೀ. 0.00 ರಿಂದ 1.00 ವರೆಗೆ ಅಭಿವೃದ್ಧಿ. | 120.00 | 120.00 | – |
| 21 | ಬಾದಾಮಿಯ ಹೋಟೆಲ್ ಮಯೂರ ಚಾಲುಕ್ಯ ಉನ್ನತೀಕರಣ ಕಾಮಗಾರಿಯ ಉಳಿಕೆ ಕಾಮಗಾರಿಗಳು. | 18.98 | 18.98 | – |

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಯೋಜನೆಗಳ ವಿವರ | ಅಂದಾಜು ಮೊತ್ತ | ಈವರೆಗೂ ಬಿಡುಗಡೆ ಮಾಡಿರುವ ಅನುದಾನ | 2019–20ನೇ ಸಾಲಿನಲ್ಲಿ ಕಾಯ್ದಿರಿಸಿರುವ ಅನುದಾನ |
|---|---|---|---|---|
| 22 | ಬಾದಾಮಿಯ ಅಗಸ್ತ್ಯತೀರ್ಥದ ಬಳಿ ಕಾಲುಪಥ ಕಾಮಗಾರಿಯ ಉಳಿಕೆ ಕಾಮಗಾರಿಗಳ ನಿರ್ಮಾಣ. | 17.90 | 17.90 | – |
| 23 | ಬಾದಾಮಿ ತಾಲ್ಲೂಕಿನ ಮಹಾಕೂಟದಲ್ಲಿ ಡಾರ್ಮಿಟರಿ ಪ್ರವಾಸಿ ಮಾಹಿತಿ ಕೇಂದ್ರ ಹಾಗೂ ಇತರೆ ಅಭಿವೃದ್ಧಿ ಕಾಮಗಾರಿಗಳ ಉಳಿಕೆ ಕಾಮಗಾರಿ. | 81.77 | 81.77 | – |
| 24 | ಬಾದಾಮಿ ತಾಲ್ಲೂಕಿನ ಸುಕ್ಷೇತ್ರ ಶ್ರೀ ಬನಶಂಕರಿಯಲ್ಲಿ ಯಾತ್ರಿನಿವಾಸ ನಿರ್ಮಾಣ. | 100.00 | 100.00 | – |
| 25 | ಬಾದಾಮಿ ಹಾಗೂ ಪಟ್ಟದಕಲ್ಲುಗಳಲ್ಲಿ ಪ್ರಚಾರ ಕೇಂದ್ರ ನಿರ್ಮಾಣ. | 16.00 | 16.00 | – |
| 26 | ಬಾದಾಮಿಯಲ್ಲಿ ಮಿನಿ ವಿಧಾನಸೌಧದ ಪಕ್ಕದಲ್ಲಿರುವ ಇಲಾಖೆಯ ಜಮೀನಿಗೆ ತಂತಿ ಬೇಲಿ ನಿರ್ಮಾಣ. | 3.70 | 3.70 | – |
| 27 | ಪಟ್ಟದಕಲ್ಲಿನ ಹತ್ತಿರ ಕಾಟಾಪುರ ಸರ್ವೇ ನಂಬರ್ ನಲ್ಲಿರುವ 24 ಎಕರೆ ಇಲಾಖೆಯ ಜಮೀನಿಗೆ ತಂತಿ ಬೇಲಿ ನಿರ್ಮಾಣ | 12.21 | 12.21 | – |
| 28 | ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲಲ್ಲೂಕಿನ ಬಾಗಲಕೋಟೆ–ಬಿಳಿಗಿರಿರಂಗನಬೆಟ್ಟ ರಾಹೆ–57 ರ ಕಿ.ಮೀ. 7.73 ರಿಮದ 29.38 ರ ವರೆಗೆ ಹಾಗೂ 34.10 ರಿಂದ 37.80 ರ ವರೆಗೆ ರಸ್ತೆ ಸುಧಾರಣೆ ಮಾಡುವುದು. | 975.00 | 731.00 | 244.00 |
| 29 | ಬಾಗಲಕೋಟೆ ಜಿಲ್ಲೆಯ ಪಟ್ಟದಕಲ್ಲಿನಲ್ಲಿರುವ ಇಲಾಖೆಯ 24 ಎಕರೆ ಜಮೀನಿನಲ್ಲಿ ಟೂರಿಸಂ ಪ್ಲಾಜಾ ನಿರ್ಮಾಣ | 800.00 | 500.00 | – |
| 30 | ಹುನಗುಂದ ತಾಲ್ಲೂಕಿನ ರಾಮದಾಳ–ಐಹೊಳೆ–ಕೆಲ್ಲೂರು ಜಿಲ್ಲಾ ಮುಖ್ಯ ರಸ್ತೆ 0.00 ಕೀಮೀ. ನಿಂದ 10.10 ಕೀ.ಮೀ ವರೆಗೆ ರಸ್ತೆ ಅಭಿವೃದ್ಧಿ. | 250.56 | 250.56 | – |
| 31 | ಹುನಗುಂದ ತಾಲ್ಲೂಕಿನ ಐಹೊಳೆ ಪ್ರದೇಶದಲ್ಲಿ ವಿವಿಧ ಸ್ಮಾರಕಗಳನ್ನು ಸಂಪರ್ಕಿಸುವ ಕೂಡುರಸ್ತೆಗಳ ಅಭಿವೃದ್ಧಿ RIDF-XIX - R-19411 | 200.00 | 100.00 | – |
| 32 | ಹುನಗುಂದ ತಾಲ್ಲೂಕಿನ ಗುಡೂರು–ಮರಡಿ–ಗಜೇಂದ್ರಗಡ ಜಿ.ಮು ರಸ್ತೆ ಕಿ.ಮೀ 0.00 ರಿಂದ 10.30 ವರೆಗೆ ಅಗಲೀಕರಣ/ಸುಧಾರಣೆ ಮಾಡುವುದು | 400.00 | 300.00 | – |

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಯೋಜನೆಗಳ ವಿವರ | ಅಂದಾಜು ಮೊತ್ತ | ಈವರೆಗೂ ಬಿಡುಗಡೆ ಮಾಡಿರುವ ಅನುದಾನ | 2019-20ನೇ ಸಾಲಿನಲ್ಲಿ ಕಾಯ್ದಿರಿಸಿರುವ ಅನುದಾನ |
|---|---|---|---|---|
| 33 | ಹುನಗುಂದ ತಾಲ್ಲೂಕಿನ ರಾಮದುರ್ಗ-ಮಾನವಿ ರಾಜ್ಯ ಹೆದ್ದಾರಿ-14 ರ ಕಿ.ಮೀ 68.11 ರಿಂದ 74.00, 76.00 ರಿಂದ 76.688, 76.865 ರಿಂದ 77.00 ಹಾಗೂ 77.248 ರಿಂದ 79.385 ವರೆಗೆ ಅಗಲೀಕರಣ/ಸುಧಾರಣೆ ಮಾಡುವುದು. | 650.00 | 488.00 | 162.00 |
| 34 | ಬಾಗಲಕೋಟೆ ಜಿಲ್ಲೆಯ ಬಾದಾಮಿ ಐಹೊಳೆ, ಪಟ್ಟದಕಲ್ಲುಗಳಲ್ಲಿ ಶುದ್ಧ ಕುಡಿಯುವ ನೀರಿನ ಸೌಲಭ್ಯ, ಪಾರ್ಕಿಂಗ್ ಸೌಲಭ್ಯ ಸ್ಮಾರಕಗಳಿಗೆ ಹೋಗುವ ದಾರಿಯಲ್ಲಿ ಸೂಚನಾ ಫಲಕ ಅಳವಡಿಕೆ | 50.00 | 50.00 | - |
| | | | | |
| | ಒಟ್ಟು | **3888.96** | **2970.12** | **406.00** |
| | ಗ್ರ್ಯಾಂಡ್ ಟೋಟಲ್ | **6869.94** | **4780.87** | **556.00** |